# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1374

ಸದಸ್ಯರ ಹೆಸರು : ಶ್ರೀ ಅರವಿಂದ ಕುಮಾರ ಅರಳಿ (ವಿಧಾನಸಭಾ ಕ್ಷೇತ್ರದಿಂದ ಚುನಾಯಿತರಾದವರು)

ಉತ್ತರಿಸಬೇಕಾದ ದಿನಾಂಕ : 16.03.2021.

ಉತ್ತರಿಸುವವರು : ಸಣ್ಣ ಕೈಗಾರಿಕೆ ಹಾಗೂ ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಸಚಿವರು.

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಬೀದರ್ ಜಿಲ್ಲೆಯಲ್ಲಿ ಸಣ್ಣ ಕೈಗಾರಿಕೆ ಅಭಿವೃದ್ಧಿಗಾಗಿ ಮತ್ತು ಅದರ ಆಕರ್ಷಣೆಗಾಗಿ ಯಾವುದಾದರೂ ಯೋಜನೆಗಳನ್ನು ಸರ್ಕಾರ ರೂಪಿಸಿದೆಯೇ; ಇದ್ದಲ್ಲಿ, ಅವು ಯಾವುವು; ಇಲ್ಲವಾದಲ್ಲಿ, ಅದಕ್ಕೆ ಪೂರಕವಾದ ಕಾರಣಗಳೇನು; | ಕರ್ನಾಟಕ ಸರ್ಕಾರವು 13/8/2020 ರಿಂದ ಹೊಸ ಕೈಗಾರಿಕಾ ನೀತಿ 2020–25 ನ್ನು ಜಾರಿಗೆ ತಂದಿದ್ದು ಇದರಲ್ಲಿ ಬೀದರ್ ಜಿಲ್ಲೆಯ ಎಲ್ಲಾ ತಾಲ್ಲೂಕುಗಳನ್ನು ವಲಯ–1 ರಡಿಯಲ್ಲಿ (ಕೈಗಾರಿಕಾಭಿವೃದ್ಧಿಯಲ್ಲಿ ಅತ್ಯಂತ ಹಿಂದುಳಿತ ತಾಲ್ಲೂಕುಗಳು) ಸೇರ್ಪಡೆಗೊಳಿಸಲಾಗಿದೆ. ಇದರನ್ವಯ ವಲಯ–2 ಮತ್ತು ವಲಯ–3 ರಲ್ಲಿ ಸಣ್ಣ ಕೈಗಾರಿಕೆಗಳನ್ನು ಸ್ಥಾಪಿಸಲು ದೊರೆಯುವ ಪ್ರೋತ್ಸಾಹ ಮತ್ತು ರಿಯಾಯಿತಿಗಳು ಹೆಚ್ಚಿನ ಮೊತ್ತದಲ್ಲಿ / ದರದಲ್ಲಿ ದೊರೆಯಲಿವೆ.<br><br>ಕಾಂಪಿಟ್ ವಿತ್ ಚೈನಾ ಯೋಜನೆಯಡಿಯಲ್ಲಿ ಬೀದರ್‌ನಲ್ಲಿ "ಕೃಷಿ ಉತ್ಪನ್ನಗಳನ್ನು ತಯಾರಿಸುವ ಕ್ಲಸ್ಟರ್" ಎಂದು ಗುರುತಿಸಲಾಗಿದೆ.<br><br>ಇದಲ್ಲದೆ ಬೀದರ್ ಜಿಲ್ಲೆಯಲ್ಲಿ ಸಣ್ಣ ಕೈಗಾರಿಕೆ ಅಭಿವೃದ್ಧಿಗಾಗಿ ಈ ಕೆಳಗಿನ ಯೋಜನೆಗಳನ್ನು ಜಾರಿಗೊಳಿಸಲಾಗುತ್ತಿದೆ.<br><br>1. ಕೇಂದ್ರ ಸರ್ಕಾರದ ಪ್ರಧಾನಮಂತ್ರಿಗಳ ಉದ್ಯೋಗ ಸೃಜನಾ ಯೋಜನೆಯಡಿ ನಗರ ಮತ್ತು ಗ್ರಾಮೀಣ ಪ್ರದೇಶಗಳಲ್ಲಿ ಕೈಗಾರಿಕೆಗಳನ್ನು ಸ್ಥಾಪಿಸಲು ಗರಿಷ್ಠ ಸಾಲ ರೂ. 25 ಲಕ್ಷಗಳವರೆಗೆ ಬ್ಯಾಂಕ್‌ಗಳ ಮೂಲಕ ಸಾಲ ಸೌಲಭ್ಯ ಒದಗಿಸಿ ಸಣ್ಣ ಉದ್ಯಮಗಳನ್ನು ಸ್ಥಾಪಿಸಿ ಸ್ವಯಂಉದ್ಯೋಗ ಕೈಗೊಳ್ಳಲು ಅನುಕೂಲ ಒದಗಿಸಲಾಗುವುದು ಹಾಗೂ ಯೋಜನಾ ವೆಚ್ಚದ ಮೇಲೆ ಶೇ. 15 ರಿಂದ ಶೇ.35 ರವರೆಗೆ ಗರಿಷ್ಠ ರೂ.3.75 ಲಕ್ಷದಿಂದ ರೂ.8.75 ಲಕ್ಷದವರೆಗೆ ಸಹಾಯಧನ ನೀಡಲಾಗುತ್ತಿದೆ.<br><br>2. ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆಯ ಮೂಲಕ ಸೂಕ್ಷ್ಮ ಮತ್ತು ಸಣ್ಣ ಕೈಗಾರಿಕೆಗಳು ಸ್ಥಾಪಿಸಲು ರೂ.5.00 ಕೋಟಿಗಳವರೆಗೆ ಸಾಲ ಪಡೆದು ನಿಗದಿತ ಸಮಯದಲ್ಲಿ ಮರುಪಾವತಿ ಮಾಡಿದ ಅತಿ ಸಣ್ಣ ಮತ್ತು ಸಣ್ಣ ಕೈಗಾರಿಕಾ ಘಟಕಗಳಿಗೆ 5 ವರ್ಷಗಳ ಅವಧಿಗೆ ಶೇಕಡ 6 ರಂತೆ ಬಡ್ಡಿ ಸಹಾಯಧನ ನೀಡಲಾಗುವುದು.<br><br>3. ಪರಿಶಿಷ್ಟ ಜಾತಿಯ ಮತ್ತು ಪರಿಶಿಷ್ಟ ಪಂಗಡದ ಉದ್ಯಮಶೀಲರಿಗೆ ವಿಶೇಷ ಘಟಕ ಉಪಯೋಜನೆ ಮತ್ತು ಗಿರಿಜನ ಉಪಯೋಜನೆಯಡಿಯಲ್ಲಿ ಶೇ 75 ರಿಯಾಯಿತಿ ದರದಲ್ಲಿ ಕೈಗಾರಿಕಾ ನಿವೇಶನಗಳನ್ನು (ಗರಿಷ್ಠ 2 ಎಕರೆ) ಮತ್ತು ಕೈಗಾರಿಕಾ ಶೆಡ್‌ಗಳನ್ನು ನೀಡಲಾಗುತ್ತಿದೆ.<br><br>4. ಪರಿಶಿಷ್ಟ ಜಾತಿಯ ಮತ್ತು ಪರಿಶಿಷ್ಟ ಪಂಗಡದ ಉದ್ಯಮಶೀಲರಿಗೆ ವಿಶೇಷ ಘಟಕ ಉಪಯೋಜನೆ ಮತ್ತು ಗಿರಿಜನ ಉಪಯೋಜನೆಯಡಿಯಲ್ಲಿ ಸ್ವಯಂ ಉದ್ಯೋಗ ಕೈಗೊಳ್ಳಲು ಬ್ಯಾಂಕಿನಿಂದ ಸಾಲ ಒದಗಿಸಿ ಯೋಜನಾ ವೆಚ್ಚದ ಮೇಲೆ ಶೇ 60 ರಷ್ಟು ಗರಿಷ್ಠ ರೂ.5.00 ಲಕ್ಷ ಸಹಾಯಧನ ನೀಡಲಾಗುತ್ತಿದೆ.<br><br>5. ಪರಿಶಿಷ್ಟ ಜಾತಿಯ ಮತ್ತು ಪರಿಶಿಷ್ಟ ಪಂಗಡದ ಮೊದಲ ಪೀಳಿಗೆಯ ಉದ್ಯಮಿದಾರರು ಬ್ಯಾಂಕ್/ ಹಣಕಾಸು ಸಂಸ್ಥೆಗಳಿಂದ ಸಾಲ ಪಡೆದು ಸ್ಥಾಪಿಸುವ ಹೊಸ ಘಟಕಗಳಿಗೆ ಗರಿಷ್ಠ ರೂ.2.00 ಕೋಟಿ ಯೋಜನಾ |

ವೆಚ್ಚದಲ್ಲಿ The Debt Equity Ratio 2:1 ಪ್ರಕಾರ (2/3 ರಷ್ಟು ಬ್ಯಾಂಕ್/ ಹಣಕಾಸು ಸಂಸ್ಥೆಗಳಿಂದ ಸಾಲ ಮತ್ತು 1/3 ಪ್ರವರ್ತಕರ ಬಂಡವಾಳ) ಘಟಕಕ್ಕೆ ಪ್ರವರ್ತಕ ಬಂಡವಾಳ ಹೂಡಿಕೆಯ 1/3 ರಲ್ಲಿ ಶೇ.50 ರಷ್ಟು ಬಡ್ಡಿರಹಿತ ಗರಿಷ್ಟ ರೂ.33 ಲಕ್ಷ ಸಾಫ್ಟ್ ಸೀಡ್ ಕ್ಯಾಪಿಟಲ್ ಆರ್ಥಿಕ ಸಹಾಯ ನೀಡಲಾಗುತ್ತಿದೆ.

6. ಕರ್ನಾಟಕ ರಾಜ್ಯ ಕೈಗಾರಿಕಾ ನೀತಿ 2020-25 ರಂತೆ ಕೆಳಕಾಣಿಸಿದ ಪ್ರೋತ್ಸಾಹ ಮತ್ತು ರಿಯಾಯಿತಿ ಸೌಲಭ್ಯಗಳನ್ನು ಅರ್ಹ ಕೈಗಾರಿಕೆಗಳಿಗೆ ನೀಡಿ ಉತ್ತೇಜಿಸಲಾಗುತ್ತಿದೆ.

   1. ಮುದ್ರಾಂಕ ಶುಲ್ಕ ವಿನಾಯಿತಿ
   2. ನೋಂದಣಿ ಶುಲ್ಕ ರಿಯಾಯಿತಿ.
   3. ಬಂಡವಾಳ ಹೂಡಿಕೆ ಸಹಾಯಧನ
   4. ಕಿರು ಮತ್ತು ಸಣ್ಣ ಕೈಗಾರಿಕೆಗಳಿಗೆ ವಿದ್ಯುತ್ ಸಹಾಯಧನ
   5. ಭೂ ಪರಿವರ್ತನಾ ಶುಲ್ಕ ಮರುಪಾವತಿ.
   6. ರಫ್ತು ಆಧಾರಿತ ಘಟಕಗಳಿಗೆ ರಿಯಾಯಿತಿ.
   7. ತ್ಯಾಜ್ಯ ಸಂಸ್ಕರಣಾ ಘಟಕಗಳ ಸ್ಥಾಪನೆಗೆ ಸಹಾಯಧನ.
   8. ವಿದ್ಯುತ್‌ತೆರಿಗೆ ವಿನಾಯಿತಿ
   9. ತಾಂತ್ರಿಕ ಉನ್ನತೀಕರಣ, ಗುಣಮಟ್ಟ ಪ್ರಮಾಣ ಪತ್ರ ಸಹಾಯಧನ
   10. ಮಳೆ ನೀರುಕೊಯ್ಲು / ಸಂರಕ್ಷಣೆ ಸಹಾಯಧನ
   11. ತಂತ್ರಜ್ಞಾನ ಉನ್ನತೀಕರಣಕ್ಕೆ ಬಡ್ಡಿ ಸಹಾಯಧನ

ಆ) ಕಳೆದ ಮೂರು ವರ್ಷಗಳಲ್ಲಿ ರಾಜ್ಯದಲ್ಲಿ ಸ್ಥಾಪಿಸಲಾಗಿರುವ ಸಣ್ಣ ಕೈಗಾರಿಕೆಗಳ ಸಂಖ್ಯೆ ಎಷ್ಟು; ರಾಜ್ಯ ಸರ್ಕಾರವು ಸಣ್ಣ ಕೈಗಾರಿಕೆಗಳಿಗೆ ಎಷ್ಟು ನಿವೇಶನಗಳನ್ನು ಹಂಚಿಕೆ ಮಾಡಲಾಗಿದೆ? (ವಿವರ ನೀಡುವುದು)

ಕಳೆದ ಮೂರು ವರ್ಷಗಳಲ್ಲಿ ರಾಜ್ಯದಲ್ಲಿ ಸ್ಥಾಪನೆಗೊಂಡು ನೋಂದಣಿಯಾಗಿರುವ ಸಣ್ಣ ಕೈಗಾರಿಕೆಗಳ ವಿವರಗಳು ಈ ಕೆಳಗಿನಂತಿವೆ.

| 2017-18 | 2018-19 | 2019-20 | ಒಟ್ಟು |
|---|---|---|---|
| 48,482 | 69,278 | 97,232 | 2,14,992 |

ರಾಜ್ಯ ಸರ್ಕಾರದ ಕರ್ನಾಟಕ ರಾಜ್ಯ ಸಣ್ಣ ಕೈಗಾರಿಕೆಗಳ ಅಭಿವೃದ್ಧಿ ನಿಗಮವು ಕಳೆದ ಮೂರು ವರ್ಷಗಳಲ್ಲಿ ಸಣ್ಣ ಕೈಗಾರಿಕೆಗಳಿಗೆ ಹಂಚಿಕೆ ಮಾಡಿರುವ ನಿವೇಶನಗಳ ವಿವರಗಳು ಈ ಕೆಳಗಿನಂತಿವೆ.

| ಕ್ರ ಸಂ | ಜಿಲ್ಲೆಗಳ ಹೆಸರು | ಹಂಚಿಕೆಯಾಗಿರುವ ನಿವೇಶನಗಳು | | | |
|---|---|---|---|---|---|
| | | **2018-19** | **2019-20** | **2020-21** | **ಒಟ್ಟು** |
| 1 | ಶಿವಮೊಗ್ಗ | 1 | 90 | 57 | 148 |
| 2 | ಉಡುಪಿ | 3 | 0 | 2 | 5 |
| 3 | ಚಿಕ್ಕಮಗಳೂರು | 0 | 0 | 1 | 1 |
| 4 | ಹಾಸನ | 0 | 0 | 1 | 1 |
| 5 | ಧಾರವಾಡ | 25 | 0 | 28 | 53 |
| 6 | ಹಾವೇರಿ | 2 | 0 | 31 | 33 |
| 7 | ಗದಗ | 0 | 0 | 13 | 13 |
| 8 | ಚಿಕ್ಕಬಳ್ಳಾಪುರ | 115 | 0 | 0 | 115 |

| | | | | | | | |
|---|---|---|---|---|---|---|---|
| | | 9 | ತುಮಕೂರು | 98 | 0 | 0 | 98 |
| | | 10 | ದಾವಣಗೆರೆ | 31 | 2 | 8 | 41 |
| | | 11 | ಚಿತ್ರದುರ್ಗ | 69 | 0 | 13 | 72 |
| | | 12 | ಮೈಸೂರು | 1 | 0 | 1 | 2 |
| | | 13 | ಚಾಮರಾಜನಗರ | 4 | 2 | 3 | 9 |
| | | 14 | ಮಂಡ್ಯ | 0 | 6 | 4 | 10 |
| | | 15 | ಮಡಿಕೇರಿ | 0 | 5 | 2 | 7 |
| | | 16 | ಬೆಳಗಾವಿ | 91 | 2 | 78 | 171 |
| | | 17 | ವಿಜಯಪುರ | 0 | 2 | 0 | 2 |
| | | 18 | ಬಾಗಲಕೋಟೆ | 1 | 0 | 6 | 7 |
| | | 19 | ಬಳ್ಳಾರಿ | 0 | 0 | 5 | 5 |
| | | 20 | ರಾಯಚೂರು | 0 | 0 | 0 | 0 |
| | | 21 | ಕೊಪ್ಪಳ | 0 | 0 | 146 | 146 |

**ಸಿಐ 34 ಸಿಎಸ್‌ಸಿ 2021**

(ಸಿ.ಸಿ. ಪಾಟೀಲ್)
ಸಣ್ಣ ಕೈಗಾರಿಕೆ ಹಾಗೂ
ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಸಚಿವರು.